ನವಸಾಕ್ಷರ ಪುಸ್ತಕ ಮಾಲೆ ೧೦೬

# ಮೂರು ಕತೆಗಳು

ಎಂ. ಆರ್. ಹೇಮಲತ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ – ೧೦೯

# ಮೂರು ಕತೆಗಳು




ಎಂ.ಆರ್.ಹೇಮಲತ






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ–೫೮೩ ೨೧೧

MOORU KATHEGALU : By M.R.Hemalatha .Published by The Director of Prasaranga, Kannada University, Hampi - 583 211, KARNATAKA.
First Impression 1994, Pp.ii + 26, Rs. 8.00.

---



**ಸಂಯೋಜನಾಧಿಕಾರಿ**
**ಡಾ.ಎಚ್.ಎಸ್.ಶ್ರೀಮತಿ**
**ಪಠ್ಯ ಪುಸ್ತಕ ರಚನಾ ವಿಭಾಗ**

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ — ೫೮೩ ೨೧೧

**ಮುಖಪುಟ ವಿನ್ಯಾಸ**
**ಕೆ.ಮಕಾಳಿ**

**ಬೆಲೆ : ರೂ. ೮.೦೦**

ಮುದ್ರಕರು
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
8/1, ಮಾರೇನಹಳ್ಳಿ, 1ನೇ ಕ್ರಾಸ್, 23ನೇ ಮೇನ್,
ಜೆ. ಪಿ. ನಗರ, ಬೆಂಗಳೂರು-560 078.
ಫೋನ್: 642102



# ಮೂರು ಕತೆಗಳು

## ೧. ಬೆಳಗಿದ ಬಾಳು

ರಾಮೋಹಳ್ಳಿ ಒಂದು ಸುಂದರವಾದ ಊರು. ಅಲ್ಲಿಯ ಜನರು ಪರಿಶ್ರಮಿಗಳು. ಸ್ನೇಹದಿಂದ ಇದ್ದರು. ಅದೇ ಊರಲ್ಲಿ ಸೀತಮ್ಮ ಎಂಬ ವಿಧವೆ ಇದ್ದಳು. ತನ್ನ ಗಂಡನ ಮರಣದ ನಂತರ ಊರಲ್ಲಿ ಎಲ್ಲರ ಮನೆಯಲ್ಲೂ ಕೆಲಸ ಮಾಡಿ ಜೀವಿಸುತ್ತಿದ್ದಳು. ಅವಳ ಮಗ ಹರೀಶ. ಅವಳಿಗೆ ಮಗನೆಂದರೆ, ಪಂಚ ಪ್ರಾಣ. ಅವನನ್ನು ಪ್ರೀತಿಯಿಂದ ಸಾಕಿ, ವಿದ್ಯೆ ಕಲಿಸಿ ಬೆಳೆಸಿದಳು. ಹರೀಶ ವಿದ್ಯೆ ಕಲಿತು ಕೆಲಸಕ್ಕೆ ಸೇರಿ ಹಣ ಗಳಿಸುವಂತಾದ. ಅವನ ಸಂಪಾದನೆ ಹೆಚ್ಚಿಗೆ ಇಲ್ಲದ ಕಾರಣ ಸೀತಮ್ಮ, ಡಾಕ್ಟರ್ ರಾಮನಾಥ್ ಎಂಬುವವರ ಮನೆಯಲ್ಲಿ ಮನೆ ಕೆಲಸಕ್ಕೆ ಹೋಗುತ್ತಿದ್ದಳು.

ಒಂದು ದಿನ ಡಾಕ್ಟರ್ ರಾಮನಾಥ್ ಆಸ್ಪತ್ರೆಗೆ ಹೋಗುವ ಆತುರದಲ್ಲಿದ್ದರು. ಅವರ ಹೆಂಡತಿ ಮಾಲ ಬೇರೆ ಯಾವುದೋ ಕೆಲಸದಲ್ಲಿದ್ದರು.




**ರಾಮೋಹಳ್ಳಿಯ ಒಂದು ದೃಶ್ಯ**

ಆಗ ಡಾಕ್ಟರ್ ತಾವೇ ತಿಂಡಿಯನ್ನು ತೆಗೆದುಕೊಳ್ಳಲು ಅಡಿಗೆಮನೆಗೆ ಹೋದರು. ಆಗ ಸೀತಮ್ಮನು ಒಲೆಯ ಮೇಲೆ ಉಕ್ಕುತ್ತಿರುವ ಹಾಲಿನ ಪಾತ್ರೆಯನ್ನು ಬರಿಯ ಕೈಯಿಂದ ಇಳಿಸುತ್ತಿದ್ದಳು. ಇದನ್ನು ಕಂಡ ರಾಮನಾಥ್‌ಗೆ ಅತ್ಯಂತ ಆಶ್ಚರ್ಯವಾಯಿತು. ಆಗ ಅವರು "ಏನಮ್ಮ ಹಾಲಿನ ಪಾತ್ರೆ ತುಂಬಾ ಬಿಸಿಯಾಗಿದೆ.

ಬರಿಯ ಕೈಯಿಂದ ಏಕೆ ಇಳಿಸಿದೆ? ನಿನ್ನ ಕೈ ಸುಡಲಿಲ್ಲವೆ? ಬಿಸಿಯಾಗಲಿಲ್ಲವೆ?" ಎಂದು ಕೇಳಿದರು. ಅದಕ್ಕೆ ಸೀತಮ್ಮನು "ಇಲ್ಲ, ಯಜಮಾನರೇ ನನಗೆ ಬಿಸಿ ಆಗಲಿಲ್ಲ. ಕೈ ಸುಡಲಿಲ್ಲ. ನನ್ನ ಕೈಗಳಿಗೆ ಬಿಸಿ ಹಾಗೂ ತಣ್ಣನೆಯದನ್ನು ಮುಟ್ಟಿದಾಗ ಏನೂ ಗೊತ್ತಾಗೊಲ್ಲ" ಎಂದು ಹೇಳಿದಳು. ಇದನ್ನು ಕೇಳಿ ಡಾಕ್ಟರ್‌ಗೆ ಬಹಳ ಬೆರಗಾಯಿತು. ಈ ಮಾತು ನಡೆಯುತ್ತಿರುವಾಗ ಡಾಕ್ಟರ್ ಅವರ ಹೆಂಡತಿ ಮಾಲ ಅಲ್ಲಿಗೆ ಬಂದರು. ಡಾಕ್ಟರ್ ಅವಳಿಗೆ ನಡೆದ ಸಮಾಚಾರ ತಿಳಿಸಿದರು. ಆಸ್ಪತ್ರೆಗೆ ಹೊರಟುಹೋದರು.

ಆಮೇಲೆ ಮಾಲ ಕೆಲವು ದಿನಗಳ ಹಿಂದೆ ನಡೆದ ಘಟನೆಯನ್ನು ನೆನಸಿಕೊಂಡರು. ಒಂದು ದಿನ ಸೀತಮ್ಮ ಅಂಗಿಗೆ ಗುಂಡಿಯನ್ನು



**ಬೆರಳಲ್ಲಿ ರಕ್ತ ಬಂದರೂ ಸೀತಮ್ಮನಿಗೆ ಗೊತ್ತಾಗಲಿಲ್ಲ**

ಹೊಲೆಯುತ್ತಿದ್ದಳು. ಮಾಲಳೂ ಅಲ್ಲಿಯೇ ಇದ್ದಳು. ಮಾತನಾಡುತ್ತಾ ಇರುವ ಸಮಯದಲ್ಲಿ ಸೀತಮ್ಮನ ಬೆರಳಿಗೆ ಸೂಜಿ ಚುಚ್ಚಿಕೊಂಡಿತು. ರಕ್ತವು ಬಂದಿತು. ಆದರೆ ಸೀತಮ್ಮನಿಗೆ ಮಾತ್ರ ನೋವಿನ ಅನುಭವ ಆಗಲಿಲ್ಲ. ಕೈಗೆ ಸೂಜಿ ಚುಚ್ಚಿದ್ದೂ ತಿಳಿಯಲಿಲ್ಲ. ಅದನ್ನು ನೆನೆಸಿಕೊಂಡು ಮಾಲ ಸಂಜೆ ಡಾಕ್ಟರ್ ಮನೆಗೆ ಬಂದನಂತರ ಅವರಿಗೆ ಆ ವಿಚಾರವನ್ನು ತಿಳಿಸಿದಳು.



ಡಾಕ್ಟರು ಸೀತಮ್ಮನನ್ನು ಪರೀಕ್ಷಿಸಿದರು

ಮಾರನೆಯ ದಿನ ರಾಮನಾಥ್ ಸೀತಮ್ಮನನ್ನು ತಮ್ಮ ಆಸ್ಪತ್ರೆಗೆ ಕರೆದುಕೊಂಡು ಹೋದರು. ಅವಳನ್ನು ಪರೀಕ್ಷಿಸಿದರು. ನಾನಾ ರೀತಿಯ ಪರೀಕ್ಷೆಯನ್ನು ನಡೆಸಿದರು. ಮರುದಿನ ಆ ಪರೀಕ್ಷೆಗಳ ಫಲಿತಾಂಶ ತಿಳಿದಾಗ ಅವರ ಅನುಮಾನ ನಿಜವಾಗಿತ್ತು. ಸೀತಮ್ಮನಿಗೆ ಕುಷ್ಠರೋಗ ತಗುಲಿತ್ತು.

ಈ ವಿಚಾರವನ್ನು ರಾಮನಾಥ್ ಸೀತಮ್ಮನಿಗೆ ತಿಳಿಸಬೇಕೆಂದು ಮಾಲಳಿಗೆ ಹೇಳಿದರು. "ತನಗೆ ಕುಷ್ಠರೋಗ ಆಗಿದೆ" ಎಂಬ ವಿಚಾರ ತಿಳಿದು ಸೀತಮ್ಮ ಜೋರಾಗಿ ಅಳಲು ಪ್ರಾರಂಭಿಸಿದಳು. ಆಕಾಶವೇ ತಲೆಯ ಮೇಲೆ ಕಳಚಿ ಬಿದ್ದಂತಾಯಿತು. ಅವಳು ತನ್ನ ಕರ್ಮವನ್ನು ಬೈಯತೊಡಗಿದಳು. ಇದು ತನ್ನ ಪಾಪಕರ್ಮ ಎಂದು ಹೇಳಿ ಅಳತೊಡಗಿದಳು.

ಆಗ ರಾಮನಾಥ್ ಅವರು "ಅಮ್ಮ ನೀನು ಚಿಂತಿಸಬೇಡ. ನಿನಗೆ ಬಂದಿರುವ ಕಾಯಿಲೆ ಎಲ್ಲ ಕಾಯಿಲೆಯಂತೆ ಗುಣವಾಗುತ್ತದೆ. ಇದು ಪಾಪದ ಫಲದಿಂದ ಬರುವುದಿಲ್ಲ. ನೀನು ಹೀಗೆ ತಿಳಿಯುವುದು ತಪ್ಪು. ಈ ರೋಗ ಯಾರಿಗೆ ಬೇಕಾದರೂ ಬರಬಹುದು. ಈ ಕಾಯಿಲೆ ಕೀಟಾಣುಗಳಿಂದ ಬರುತ್ತದೆ. ಸರಿಯಾದ ಔಷಧಿ ಉಪಚಾರ ದೊರೆತರೆ ಖಂಡಿತಾ ಗುಣವಾಗುತ್ತದೆ. ಚಿಂತಿಸಬೇಡ" ಎಂದು ಸಮಾಧಾನಪಡಿಸಿದರು. ಮಾಲಳೂ ಸಹಾ ಸೀತಮ್ಮನಿಗೆ "ಈ ರೋಗ ಗುಣವಾಗುತ್ತದೆ. ಚಿಂತಿಸಬೇಡ, ದುಃಖಪಡಬೇಡ. ನಿನ್ನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಿ ಚಿಕಿತ್ಸೆ ಕೊಡಿಸುತ್ತೇವೆ" ಎಂದು ಸಮಾಧಾನ ಹೇಳಿದಳು.

ಮಾರನೆಯ ದಿನ ರಾಮನಾಥ್ ಸೀತಮ್ಮನನ್ನು ಆಸ್ಪತ್ರೆಗೆ ಕರೆದುಕೊಂಡು ಹೋದರು. ಔಷಧಿ, ಮಾತ್ರೆ ಚುಚ್ಚುಮದ್ದು ಕೊಟ್ಟರು. ಔಷಧಿಯನ್ನು ತಪ್ಪದೆ

ಕ್ರಮವಾಗಿ ತೆಗೆದುಕೊಳ್ಳಬೇಕೆಂದು ತಿಳಿಸಿದರು. ಚುಚ್ಚುಮದ್ದನ್ನು ತಪ್ಪಿಸದೆ ತೆಗೆದುಕೊಳ್ಳಬೇಕೆಂದು ಹೇಳಿದರು. ಆದರೂ ಸೀತಮ್ಮನಿಗೆ ಸಮಾಧಾನ ಇರಲಿಲ್ಲ. ತನ್ನ ಕಾಯಿಲೆ ತನ್ನಿಂದ ಬೇರೆಯವರಿಗೆ ತಗಲುವುದು ಬೇಡ ಎಂದು ಆಲೋಚಿಸಿ ರಾಮನಾಥ್ ಅವರ ಮನೆಯ ಕೆಲಸವನ್ನು ಬಿಟ್ಟಳು. ಅವಳು ಮಗನ ಮನೆಯಲ್ಲಿಯೇ ಇರತೊಡಗಿದಳು.

ಈಗ ಸೀತಮ್ಮನಿಗೆ ಮಗನ ಮನೆಯಲ್ಲಿ ವಾಸ. ಮಗ ಹರೀಶ, ಸೊಸೆ ಕಮಲ, ಮೊಮ್ಮಗ ರವಿ, ಸುಂದರವಾದ ಕುಟುಂಬ. ಅವರನ್ನು ನೋಡಿ ಸೀತಮ್ಮ ತನ್ನ ದುಃಖವನ್ನು ಮರೆಯಬಲ್ಲೆ ಎಂದು ಸಮಾಧಾನ ತಾಳಿದಳು. ಆದರೂ ಮನಸ್ಸಿನಲ್ಲಿ ತನ್ನ ಕಾಯಿಲೆಯ ಬಗ್ಗೆ ಭಯ. ಸೊಸೆ ಕಮಲ ಸೀತಮ್ಮನಿಗೆ ಯಾವ ಕೆಲಸ ಮಾಡಲೂ ಬಿಡುತ್ತಿರಲಿಲ್ಲ. "ಸುಮ್ಮನೆ ನೀವು ವಿಶ್ರಾಂತಿ ತೆಗೆದುಕೊಳ್ಳಿ" ಎಂದು ಹೇಳುತ್ತಿದ್ದಳು. ಇದನ್ನು ಕಂಡು ಸೀತಮ್ಮ ತನ್ನ ಸೊಸೆ ಚೆನ್ನಾಗಿ ನೋಡಿಕೊಳ್ಳುತ್ತಿದ್ದಾಳೆ ಎಂದು ಸಂತೋಷಪಟ್ಟಳು. ತಾನು ನೆಮ್ಮದಿಯಿಂದ ಇರಬಲ್ಲೆ ಎಂದು ಭಾವಿಸಿದಳು. ಮೊಮ್ಮಗ ರವಿಗೆ ಅಜ್ಜಿ ಅಚ್ಚುಮೆಚ್ಚು. ಈ ವಿಷಯ ಅವಳ ಬಾಳಿಗೆ ಸಂತಸ ತಂದಿತ್ತು.

ಆದರೆ ಒಳಗಿನ ಗುಟ್ಟು ಬೇರೆಯಾಗಿತ್ತು. ಕಮಲಳಿಗೆ ತನ್ನ ಅತ್ತೆ ಮನೆಯಲ್ಲಿ ಯಾವುದನ್ನು ಮುಟ್ಟುವುದು ಸಹಿಸುತ್ತಿರಲಿಲ್ಲ. ಯಾವಾಗಲೂ ಅವಳನ್ನು ದೂರ ಇಡಲು ಬಯಸುತ್ತಿದ್ದಳು. ತಾನು ಕೊಟ್ಟಿದ್ದನ್ನು ಅತ್ತೆ ತಿನ್ನಬೇಕು. ಅವಳ ಬಟ್ಟೆಬರೆಗಳನ್ನು ದೂರ ಇಡಬೇಕು ಎಂಬ ವಿಚಾರ ಅವಳ ಮನಸ್ಸಿನಲ್ಲಿ ಇತ್ತು. ರವಿ ಅಜ್ಜಿಯ ಬಳಿ ಆಡಲು, ಮಾತಾಡಲು ಬಂದರೆ ಅವನನ್ನು ಹೊಡೆದು ಬೈದು ಕರೆದುಕೊಂಡು ಹೋಗುತ್ತಿದ್ದಳು. ಮಗ ಹರೀಶ



**ತನ್ನ ವಿರುದ್ಧ ಮಗನ ಬಳಿ ಸೊಸೆ**
**ಚಾಡಿ ಹೇಳುತ್ತಿರುವುದನ್ನು ಸೀತಮ್ಮ ಕೇಳಿಸಿಕೊಂಡಳು**

ನೆಪಕ್ಕೆ ತಾಯಿಯನ್ನು ವಿಚಾರಿಸುತ್ತಿದ್ದ. ಕಮಲಳ ತಾಳಕ್ಕೆ ಸರಿಯಾಗಿ ಕುಣಿಯುತ್ತಿದ್ದ. ಈ ಎಲ್ಲಾ ವಿಚಾರಗಳು ನಿಧಾನವಾಗಿ ಸೀತಮ್ಮನ ಗಮನಕ್ಕೆ ಬಂದಿತು. ಅವಳಿಗೆ ಬಹಳ ದುಃಖವಾಯಿತು. ತನಗೆ ಇನ್ನು ಯಾರು ದಿಕ್ಕು ಎಂದು ಯೋಚಿಸತೊಡಗಿದಳು.

ಒಂದು ದಿನ ಸೀತಮ್ಮ ತನ್ನ ಕೊಠಡಿಯಲ್ಲಿ ಇದ್ದಳು. ಆ ಸಮಯದಲ್ಲಿ ಕಮಲ ಹರೀಶನಿಗೆ ಮಾತುಕತೆ ನಡೆಯಿತು. ಕಮಲ ಹರೀಶನಿಗೆ "ನೋಡಿ ನಿಮ್ಮ ತಾಯಿಗೆ ಭಯಂಕರವಾದ ಕಾಯಿಲೆ ಬಂದಿದೆ. ಅದು ಈ ಜನ್ಮದಲ್ಲಿ ವಾಸಿಯಾಗುವುದಿಲ್ಲ. ಅವರು ನಮ್ಮ ಜೊತೆಯಲ್ಲಿ ಇದ್ದರೆ ನಮಗೂ ಆ ಕಾಯಿಲೆ ಬರುತ್ತದೆ. ಅವರನ್ನು ಎಲ್ಲಾದರೂ ಬೇರೆ ಕಡೆ ಕಳುಹಿಸಿ, ಇಲ್ಲದಿದ್ದರೆ

ನಾನು ನನ್ನ ಮಗನನ್ನು ಕರೆದುಕೊಂಡು ನನ್ನ ತೌರಿಗೆ ಹೋಗುತ್ತೇನೆ" ಎಂದು ಹೇಳಿದಳು. ಈ ಮಾತುಗಳನ್ನು ಸೀತಮ್ಮ ತನ್ನ ಕಿವಿಯಾರೆ ಕೇಳಿಸಿಕೊಂಡಳು. ಮಗನಾದರೂ ತನ್ನ ಪರವಾಗಿ ಮಾತನಾಡಬಹುದು ಎಂದು ಆಸೆಯಿಂದ ಕಾದಳು. ಆದರೆ ಹರೀಶನು ಅದಕ್ಕೆ ಉತ್ತರಿಸಲಿಲ್ಲ. ಅವನಿಗೂ ಸಹಾ ಕುಷ್ಠರೋಗದ ಬಗ್ಗೆ ಹೆದರಿಕೆ ಇತ್ತು. ಇದರಿಂದ ಸೀತಮ್ಮನಿಗೆ ಅತೀವ ಆಘಾತ, ನಿರಾಸೆ ಉಂಟಾಯಿತು.

ಆ ದಿನವೆಲ್ಲ ಸೀತಮ್ಮ ಯೋಚಿಸಿ ಒಂದು ನಿರ್ಧಾರಕ್ಕೆ ಬಂದಳು. ತಾನು ಆ ಮನೆಯಲ್ಲಿ ಇದ್ದರೆ ಯಾರಿಗೂ ನೆಮ್ಮದಿ ಇರುವುದಿಲ್ಲ. ತನಗೂ ಶಾಂತಿ ಇರುವುದಿಲ್ಲ. ಆದ್ದರಿಂದ ತಾನೇ ಮನೆ ಬಿಟ್ಟು ಎಲ್ಲಾದರೂ ಹೋಗುತ್ತೇನೆ ಎಂದು ನಿಶ್ಚಯಿಸಿದಳು. ಅದರಂತೆ ಯಾರಿಗೂ ತಿಳಿಸದೆ ಬೆಳಗಾಗುವುದರಲ್ಲಿ ಮನೆಯಿಂದ ಹೊರಟುಹೋದಳು.

ಮಗನ ಮನೆಯಿಂದ ಹೊರಟ ಸೀತಮ್ಮನಿಗೆ ದಾರಿ ಕಾಣದಾಗಿದೆ. ಎಲ್ಲಿಗೆ ಹೋಗಬೇಕು? ಏನು ಮಾಡಬೇಕು? ತನಗೆ ಯಾರು ದಿಕ್ಕು? ಯಾವುದೂ ತಿಳಿಯುತ್ತಿಲ್ಲ. ಕಡೆಗೆ ಅವಳಿಗೆ ರಾಮನಾಥ್ ಅವರ ಮನೆ ನೆನಪಿಗೆ ಬಂದಿತು. ಅವರು ತನಗೆ ದಿಕ್ಕಾಗುವರು ಎಂದು ಭಾವಿಸಿ ಡಾಕ್ಟರ್ ಅವರ ಮನೆಯ ಕಡೆ ಹೊರಟಳು.

ಡಾಕ್ಟರ್ ರಾಮನಾಥ್ ಅವರ ಮನೆ ತಲುಪಿದಾಗ ಮಧ್ಯಾಹ್ನವಾಗಿತ್ತು. ಸೀತಮ್ಮ ಮನದಲ್ಲೇ ಹೆದರುತ್ತಿದ್ದಳು. ಡಾಕ್ಟರ್ ಮನೆಯವರು ನನ್ನನ್ನು ಪುನಃ ಮನೆಗೆ ಸೇರಿಸುತ್ತಾರೆಯೇ? ಅವರ ಹೆಂಡತಿ ನನ್ನನ್ನು ಹಿಂದಿನಂತೆ ಪ್ರೀತಿಯಿಂದ ಕಾಣುತ್ತಾರೆಯೆ? ಈ ಎಲ್ಲಾ ವಿಚಾರಗಳು ಅವಳ ಮನಸ್ಸನ್ನು ಕಾಡುತ್ತಿತ್ತು. ಹೆದರುತ್ತಲೇ ಸೀತಮ್ಮ ಬಾಗಿಲು ತಟ್ಟಿದಳು.

ಮಾಲ ಬಾಗಿಲು ತೆಗೆದು ಸೀತಮ್ಮನನ್ನು ನೋಡಿದಳು. ನೋಡುತ್ತಲೆ "ಅರೆ, ಸೀತಮ್ಮ! ನೀನು ಇಷ್ಟು ದಿನ ಎಲ್ಲಿಗೆ ಹೊರಟುಹೋಗಿದ್ದೆ? ನಮಗೆ ತಿಳಿಸದೆ ಯಾಕೆ ಹೋದೆ? ಒಳಗೆ ಬಾ" ಎಂದು ಆದರದಿಂದ ಕರೆದರು. ಇದನ್ನು ಕಂಡು ಸೀತಮ್ಮನ ಕಣ್ಣಲ್ಲಿ ನೀರು ತುಂಬಿತು. ಒಳಗೆ ಬಂದು ತನ್ನ ಎಲ್ಲಾ ವಿಚಾರವನ್ನು ತಿಳಿಸಿದಳು. ದುಃಖ ತಡೆಯಲಾರದೆ ಬಿಕ್ಕಿ ಬಿಕ್ಕಿ ಅತ್ತಳು. ಮಾಲ ಅವಳನ್ನು ಸಮಾಧಾನಪಡಿಸಿದಳು.

ಅಷ್ಟರಲ್ಲಿ ಡಾಕ್ಟರ್ ರಾಮನಾಥ್ ಮನೆಗೆ ಬಂದರು. ಸೀತಮ್ಮನ ಎಲ್ಲಾ ವಿಷಯ ತಿಳಿದರು. ಸೀತಮ್ಮನಿಗೆ "ನೋಡಮ್ಮ ನಾನು ನಿನಗೆ ಹಿಂದೆ ತಿಳಿಸಿದ್ದೆ. ಕುಷ್ಠರೋಗ ಪಾಪಕರ್ಮದಿಂದ ಬರುವುದಿಲ್ಲ. ಸೀನುವಾಗ, ಕೆಮ್ಮುವಾಗ, ಉಗುಳುವಾಗ ಬಾಯಿ ಮತ್ತು ಮೂಗನ್ನು ಮುಚ್ಚಿಕೊಳ್ಳಬೇಕು. ಏಕೆಂದರೆ ಆ ಸಮಯದಲ್ಲಿ ಕೀಟಾಣುಗಳು ಎಲ್ಲ ಕಡೆ ಹರಡಿ ಕಾಯಿಲೆ ಬೇರೆಯವರಿಗೆ ಬರುತ್ತದೆ. ಸರಿಯಾದ ಔಷಧಿಯಿಂದ ಈ ಕಾಯಿಲೆ ಖಂಡಿತಾ ಗುಣವಾಗುತ್ತದೆ. ನೀನು ಚಿಂತಿಸಬೇಡ. ನೀನು ಎಷ್ಟು ದಿನ ಬೇಕಾದರೂ ನಮ್ಮ ಮನೆಯಲ್ಲಿ ಇರಬಹುದು. ನಿನ್ನ ಕೈಗಳನ್ನು ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಏಕೆಂದರೆ ಕೈಗಳಿಗೆ ಯಾವ ರೀತಿಯ ಗಾಯಗಳು ಆಗಬಾರದು" ಎಂದು ತಿಳಿಸಿದರು.

ಸೀತಮ್ಮನಿಗೆ ಅವರ ಮಾತು ಕೇಳಿ ನೆಮ್ಮದಿಯಾಯಿತು. ಮನಸ್ಸು ತುಂಬಿ ಬಂತು. ಅವರಿಬ್ಬರ ಬಗ್ಗೆ ಗೌರವ ಹೆಚ್ಚಿತು. ಅವರ ಕಾಲಿಗೆ ಬಿದ್ದಳು. ಮಾಲ ಅವಳನ್ನು ಎಬ್ಬಿಸಿ ಹೇಳಿದಳು. "ಸರಿ ಇನ್ನು ನೀನು ಇರಬೇಕಾದ ಕೋಣೆಯನ್ನು ಸ್ವಚ್ಛಮಾಡಿಕೋ. ನಮಗೆ ಸಹಾಯ ಮಾಡುತ್ತ ನಮ್ಮೊಡನೆ ನೆಮ್ಮದಿಯಿಂದ ಇರು" ಎಂದು ಹೇಳಿದಳು.

ಈಗ ಸೀತಮ್ಮನ ಜೀವನ ನೆಮ್ಮದಿಯಿಂದ ನಡೆಯುತ್ತಿದೆ. ಡಾಕ್ಟರ್ ಪುನಃ ಅವಳಿಗೆ ಚಿಕಿತ್ಸೆ ಪ್ರಾರಂಭಿಸಿದರು. ಔಷಧಿ ಕ್ರಮವಾಗಿ ತೆಗೆದುಕೊಳ್ಳತೊಡಗಿದಳು. ಹೀಗೆ ಎರಡು ವರ್ಷಗಳು ಕಳೆದವು. ದಿನಕಳೆದಂತೆ ನಿಧಾನವಾಗಿ ಸೀತಮ್ಮನ ಕಾಯಿಲೆ ಗುಣವಾಗತೊಡಗಿತು. ಒಂದು ದಿನ ಡಾಕ್ಟರ್ ಅವಳ ಕಾಯಿಲೆ ಪೂರ್ಣವಾಗಿ ಗುಣವಾಗಿದೆ ಎಂದು ತಿಳಿಸಿದರು. ಇದನ್ನು ಕೇಳಿ ಸೀತಮ್ಮನ ಸಂತೋಷಕ್ಕೆ ಎಣೆಯೇ ಇಲ್ಲ.

ಮಾರನೆಯ ದಿನ ಸೀತಮ್ಮ ತಾನು ಪುನಃ ತನ್ನ ಮಗನ ಮನೆಗೆ ಹೋಗುವ ಆಸೆಯನ್ನು ತಿಳಿಸಿದಳು. ಆಗ ಡಾಕ್ಟರ್ ಮತ್ತು ಅವರ ಹೆಂಡತಿ ಒಪ್ಪಿದರು. ಆದರೆ ಸೀತಮ್ಮನಿಗೆ ಹಿಂದೆ ನಡೆದಂತೆ ಮಗನ ಮನೆಯಲ್ಲಿ ಆಗಬಾರದು ಎಂದು ಯೋಚಿಸಿದರು. ಸೀತಮ್ಮನ ಮಗ ಹರೀಶ ಮತ್ತು ಸೊಸೆ ಕಮಲಳಿಗೆ ಹೇಳಿ ಕರೆತರುವಂತೆ ಸೀತಮ್ಮನಿಗೆ ತಿಳಿಸಿದರು.

ಸೀತಮ್ಮ ತನ್ನ ಮಗ ಸೊಸೆಯೊಂದಿಗೆ ಆಸ್ಪತ್ರೆಗೆ ಬಂದಳು. ಆಗ ವೈದ್ಯರು ಅವರನ್ನು ಕುರಿತು ಹೇಳಿದರು. ಈ ಕುಷ್ಠರೋಗ ಅಂಟುರೋಗವಲ್ಲ. ಪಾಪಕರ್ಮದಿಂದ ಬರುವುದಿಲ್ಲ. ಈ ಕಾಯಿಲೆಯನ್ನು ವಾಸಿಮಾಡಬಹುದು. ಸಕಾಲದಲ್ಲಿ ಸರಿಯಾದ ಚಿಕಿತ್ಸೆ ಪಡೆದರೆ ಈ ಕಾಯಿಲೆ ವಾಸಿಯಾಗುತ್ತದೆ. ಈಗ ನಿಮ್ಮ ತಾಯಿಯ ಕಾಯಿಲೆ ಸಂಪೂರ್ಣವಾಗಿ ಗುಣವಾಗಿದೆ. ಅವರೊಂದಿಗೆ ಪ್ರೀತಿಯಿಂದ ನಡೆದುಕೊಳ್ಳಬೇಕು. ಭೇದಭಾವ ಮಾಡಬಾರದು. ರೋಗಿಗಳಿಗೆ ಔಷಧದಷ್ಟೇ ಪ್ರೀತಿಯೂ ಮುಖ್ಯ. ನಿಮ್ಮ ತಾಯಿಯನ್ನು ನೀನು ಪ್ರೀತಿಯಿಂದ ನೋಡಿಕೊಳ್ಳಬೇಕು ಎಂದು ತಿಳಿಸಿದರು.

ಡಾಕ್ಟರ್ ಮಾತುಗಳನ್ನು ಕೇಳಿ ಹರೀಶ ಮತ್ತು ಅವನ ಹೆಂಡತಿ ಕಮಲಳಿಗೆ ತಮ್ಮ ತಪ್ಪು ತಿಳಿಯಿತು. ಇದರಿಂದ ಅವರಿಗೆ ದುಃಖವಾಯಿತು. ತಾವುಗಳು ಸೀತಮ್ಮನಿಗೆ ಕೊಟ್ಟ ದುಃಖ, ತೊಂದರೆ, ಅವಮಾನ ಇವುಗಳನ್ನು ನೆನೆದು ನಾಚಿಕೆಯಾಯಿತು. ಇನ್ನೆಂದೂ ತಾವು ಸೀತಮ್ಮನನ್ನು ಬಿಟ್ಟಿರುವುದಿಲ್ಲ. ಅವಳಿಗೆ ದುಃಖ ನೀಡುವುದಿಲ್ಲ ಎಂದು ನಿಶ್ಚಯಿಸಿದರು. ಅವಳಲ್ಲಿ ಕ್ಷಮೆ ಕೇಳಿದರು. ಕಾಲಿಗೆ ಬಿದ್ದರು. ಮೊಮ್ಮಗ ರವಿ ಅಜ್ಜಿಯ ಕೈಹಿಡಿದು ಎಳೆಯುತ್ತ "ನಡಿ ಅಜ್ಜಿ ಮನೆಗೆ ಹೋಗೋಣ" ಎಂದ. ಸೀತಮ್ಮನ ಮನಸ್ಸು ತುಂಬಿ ಬಂತು. ಮಗ ಸೊಸೆ ಮೊಮ್ಮಗನೊಂದಿಗೆ ಹೊರಟ ಸೀತಮ್ಮನನ್ನು ಕಂಡು ಡಾಕ್ಟರ್ ದಂಪತಿಗಳು ಸಂತೋಷಪಟ್ಟರು. ತನಗೆ ಹೊಸ ಬಾಳು ನೀಡಿದ ಡಾಕ್ಟರ್ ಕಾಲಿಗೆ ಸೀತಮ್ಮ ಬಿದ್ದಳು. ಅವರು "ಸೀತಮ್ಮ ನಿನ್ನ ಬಾಳು ಹಸನಾಗಲಿ. ಬೇರೆಯವರಿಗೆ ಮಾದರಿಯಾಗಲಿ" ಎಂದು ಹರಸಿ ಕಳುಹಿಸಿಕೊಟ್ಟರು. ಹೀಗೆ ಸೀತಮ್ಮನ ಬಾಳು ಬೆಳಕಾಯಿತು.

***



# ೨. ಮಾನವ ಸೇವೆ ಮಾಧವ ಸೇವೆ

ಭೀಮಾ ನದಿಯ ತೀರ. ಸುತ್ತಮುತ್ತ ಕಾಡು. ಅಲ್ಲೊಂದು ಸಣ್ಣ ಊರು. ಊರಿಂದ ಆಚೆಗೆ ಒಂದು ಆಶ್ರಮ ಇತ್ತು. ಅಲ್ಲಿ ಸ್ವಾಮಿ ಚಿದಾನಂದ ಎಂಬ ಮುನಿ ವಾಸವಾಗಿದ್ದನು. ಸದಾ ದೇವರ ಜಪತಪ, ಧ್ಯಾನ ಇದರಲ್ಲೇ ಇರುತ್ತಿದ್ದನು. ಸರಳ ಜೀವನ ಉನ್ನತ ವಿಚಾರ ಇವನದಾಗಿತ್ತು.



ಯುವಕ ಚಿದಾನಂದರಿಗೆ ನಮಸ್ಕರಿಸಿದನು

ಒಂದು ದಿನ ಮುನಿ ಧ್ಯಾನದಲ್ಲಿ ತೊಡಗಿದ್ದನು. ಆಗ ಅಲ್ಲಿಗೆ ಸುಮಾರು ಹದಿನಾರು-ಹದಿನೇಳು ವರ್ಷದ ಒಬ್ಬ ಯುವಕ ಬಂದನು. ಬಂದವನೇ ಮುನಿಯ ಕಾಲಿಗೆ ಬಿದ್ದನು. ಸ್ವಾಮಿ ಚಿದಾನಂದರು ಅವನನ್ನು ಕುರಿತು "ಯಾರಪ್ಪ ನೀನು? ನಿನ್ನ ಹೆಸರೇನು? ಇಲ್ಲಿಗೆ ಏಕೆ ಬಂದೆ?" ಎಂದು ಕೇಳಿದರು. ಆಗ ಅವನು "ಸ್ವಾಮಿ, ನಾನು ಪಕ್ಕದ ಊರಿನವನು. ನನ್ನ ಹೆಸರು ಮುನಿಯ. ನಿಮ್ಮ ದಯೆಗಾಗಿ ಬಂದಿದ್ದೇನೆ" ಎಂದು ಹೇಳಿದನು. ಆಗ ಋಷಿಯು "ನನ್ನಿಂದ ಏನಾಗಬೇಕು?" ಎಂದು ಕೇಳಿದರು. ಅದಕ್ಕೆ ಮುನಿಯನು "ಸ್ವಾಮಿ, ನಾನು ಸಾಧು ಆಗಬೇಕು. ಭಗವಂತನ ಜಪ, ತಪ, ಭಜನೆ ಮಾಡುತ್ತಾ ನನ್ನ ಜೀವನ ಕಳೆಯಬೇಕು. ಅದಕ್ಕಾಗಿ ನೀವು ನನ್ನನ್ನು ಶಿಷ್ಯನನ್ನಾಗಿ ದಯವಿಟ್ಟು ಸ್ವೀಕರಿಸಿ. ನನ್ನಗೆ ಮಂತ್ರೋಪದೇಶ ಮಾಡಿದರೆ ನಾನು ಧನ್ಯನಾಗುತ್ತೇನೆ. ಕೃಪೆ ಮಾಡಿ" ಎಂದು ಬೇಡಿಕೊಂಡನು.



ಅದನ್ನು ಕೇಳಿ ಋಷಿಗಳು "ನಿನ್ನ ತಂದೆ ತಾಯಿಯಾರು? ನಿನ್ನ ವಿಚಾರವೇನು?" ಎಂದು ಕೇಳಿದಾಗ ಮುನಿಯನು"ಸ್ವಾಮಿ, ನನಗೆ ತಂದೆ ತಾಯಿ ಯಾರೂ ಇಲ್ಲ. ಅವರಿಬ್ಬರೂ ಬಹಳ ದಿನಗಳ ಹಿಂದೆಯೇ ಸತ್ತು ಹೋದರು. ನಾನು ಭಿಲ್ಲರ ಜಾತಿಗೆ ಸೇರಿದವನು. ನಮ್ಮ ತಂದೆ ತಾಯಿ ಇಬ್ಬರಿಗೂ ಕಾಯಿಲೆಯಾಗಿತ್ತು. ಅವರು ಸರಿಯಾದ ಔಷಧಿ ತೆಗೆದುಕೊಳ್ಳಲು ಒಪ್ಪಲಿಲ್ಲ. ಮೂಢನಂಬಿಕೆಯಿಂದ ಯಂತ್ರ, ಮಂತ್ರ ಇವುಗಳನ್ನು ನಂಬಿದರು. ಸರಿಯಾದ ಔಷಧಿ, ಚಿಕಿತ್ಸೆ ದೊರೆಯದೆ ಅವರು ಸತ್ತುಹೋದರು" ಎಂದು ಹೇಳಿದನು. ಸ್ವಾಮಿಗಳು "ಅಯ್ಯಾ ತಂದೆ, ತಾಯಿಯನ್ನು ಬಿಟ್ಟರೆ ನಿನಗೆ ಇನ್ಯಾರು ಇಲ್ಲವೇ?" ಎಂದು ಕೇಳಲು ಮುನಿಯನು "ಸ್ವಾಮಿ, ನನ್ನ ಬಂಧು ಒಬ್ಬಳು ಇದ್ದಾಳೆ. ಅವಳ ಹೆಸರು ಚೆನ್ನಿ. ಅವಳೊಡನೆ ಬಹಳ ಹಿಂದೆ ನನ್ನ ತಂದೆ ತಾಯಿ

ಇದ್ದಾಗಲೇ ನನಗೆ ಲಗ್ನ ನಿಶ್ಚಯವಾಗಿದೆ. ಆದರೆ ನಿಮ್ಮ ಶಿಷ್ಯನಾಗಲು ರಾಮನ ಕೃಪೆ ಹೊಂದಲು ನಾನು ಅವಳನ್ನು ಬಿಟ್ಟುಬಿಡಲು ಸಿದ್ಧವಾಗಿದ್ದೇನೆ" ಎಂದು ಹೇಳಿದನು.

ಮುನಿಯನ ಎಲ್ಲ ವಿಚಾರಗಳನ್ನು ಸ್ವಾಮಿ ಚಿದಾನಂದರು ತಿಳಿದರು. ಆಗ ಅವರು "ಮುನಿಯ, ನೀನು ಭಿಲ್ಲರ ಜಾತಿಗೆ ಸೇರಿದವನು. ನಿನ್ನ ಜಾತಿಯವರೇ ಆದ ಶಬರಿ, ಗುಹ ಇವರೆಲ್ಲರೂ ರಾಮನಿಗೆ ಅತ್ಯಂತ ಪ್ರಿಯರಾದವರು. ರಾಮನಿಗೆ ಸೇವೆ ಮಾಡಿ ಮುಕ್ತಿಯನ್ನು ಪಡೆದರು ರಾಮಭಕ್ತರು. ಭಗವಂತನ ಪ್ರೀತಿಗೆ ಜಾತಿ ಎಂದಿಗೂ ಮುಖ್ಯವಲ್ಲ. ನಿನ್ನ ವಿಚಾರವನ್ನು ಯೋಚಿಸುತ್ತೇನೆ" ಎಂದು ಆಶ್ರಮದ ಬಳಿಗೆ ನಡೆದರು.

ಆಶ್ರಮದ ಸುತ್ತಮುತ್ತ ಕಾಡು ಇತ್ತು. ಅಷ್ಟರಲ್ಲಿ ಆಶ್ರಮದ ಬಳಿ ಗದ್ದಲ ಚೀರಾಟ ಕೇಳಿತು. ಜೊತೆಗೆ ಓಡುವ ಕೂಗುವ ದಡದಡ ಸದ್ದು ಕೇಳಿತು. ಅಷ್ಟರಲ್ಲಿ ಆಶ್ರಮದ ಶಿಷ್ಯರು ಓಡುತ್ತಾ ಕಾಡಿನಿಂದ ಕಾಡು ಕೋಣವು ಆಶ್ರಮಕ್ಕೆ ನುಗ್ಗುತ್ತಿದೆ ಎಂದು ನಡುಗುತ್ತಾ ತಿಳಿಸಿದ. ಇದನ್ನು ಕೇಳಿದ ತಕ್ಷಣ ಮುನಿಯನು ಆಶ್ರಮದ ಹೊರಗೆ ನುಗ್ಗಿದ. ಕಾಡುಕೋಣವು ಹೂಂಕರಿಸುತ್ತ ನುಗ್ಗುತ್ತಿದೆ. ಉಳಿದ ಶಿಷ್ಯರು ದಿಕ್ಕು ತೋರದೆ ಭಯದಿಂದ ನಡುಗುತ್ತಿದ್ದಾರೆ. ಮುನಿಯನು ಧೈರ್ಯದಿಂದ ಅಲ್ಲಿಯೇ ಬಿದ್ದಿದ್ದ ಒಂದು ದೊಡ್ಡದಾದ ಕೊಡಲಿಯನ್ನು ತೆಗೆದುಕೊಂಡ. ಕೋಣವು ಅವನನ್ನು ನೋಡಿ ಹೂಂಕರಿಸಿ ಗರ್ಜಿಸಿ ಮೇಲೆ ಎಗರಿತು. ಚೂಪಾದ ಕೊಂಬಿನಿಂದ ತಿವಿಯಿತು. ಇದರಿಂದ ಮುನಿಯನಿಗೆ ಗಾಯಗಳಾಗಿ ರಕ್ತ ಸುರಿಯಲಾರಂಭಿಸಿತು. ಆದರೂ ಅವನು ಎದೆಗುಂದಲಿಲ್ಲ. ಅಷ್ಟರಲ್ಲಿ ಊರಿನ ಜನರೂ ಕೆಲವರು ಸೇರಿದರು. ಸಮಯ



**ಮುನಿಯ ಧೈರ್ಯದಿಂದ ಗೂಳಿಯನ್ನು ಎದುರಿಸಿದ**

ನೋಡಿ ಮುನಿಯನು ಕೋಣಕ್ಕೆ ಕೊಡಲಿಯಿಂದ ಹೊಡೆದ. ಕೋಣವು ನೆಲಕ್ಕೆ ಬಿದ್ದು ಸತ್ತಿತು. ಅಷ್ಟರಲ್ಲಿ ಈ ವಿಚಾರ ಚೆನ್ನಿಗೂ ತಿಳಿಯಿತು. ಅವಳು ಗಾಬರಿಯಿಂದ ಅಲ್ಲಿಗೆ ಓಡಿಬಂದಳು. ಅವನಿಗಾದ ಗಾಯಗಳನ್ನು ಕಂಡು ಅವಳಿಗೆ ದುಃಖವಾಯಿತು. ಅವುಗಳಿಗೆ ಪಟ್ಟಿ ಕಟ್ಟಿದಳು.

ಸ್ವಾಮಿ ಚಿದಾನಂದರಿಗೆ ಇದನ್ನೆಲ್ಲ ಕಂಡು ಆಶ್ಚರ್ಯ. ಮುನಿಯನ ಸಾಹಸಕ್ಕೆ ಮೆಚ್ಚಿದರು. ಇಂದು ಮುನಿಯ ಇಲ್ಲದಿದ್ದರೆ ಆಶ್ರಮದ ಅನೇಕ ಜನರು ಸಾಯುತ್ತಿದ್ದರು. ಎಲ್ಲರನ್ನು ಮುನಿಯ ಕಾಪಾಡಿದ್ದ. ಋಷಿಗಳು ಅವನನ್ನು ಪ್ರೀತಿಯಿಂದ ಆಶೀರ್ವದಿಸಿದರು. ಮುನಿಯ ಮತ್ತು ಚೆನ್ನಿಯ ಪ್ರೀತಿಯನ್ನು ಗುರುತಿಸಿ ಅವರಿಬ್ಬರಿಗೆ ವಿವಾಹ ಮಾಡಬೇಕೆಂದು ನಿಶ್ಚಯಿಸಿದರು.

ಮರುದಿನ ಸ್ವಾಮಿಗಳು ಮುನಿಯನನ್ನು ಕುರಿತು "ಮುನಿಯ ನೀನು ಸಾಧುವಾದರೆ ಚೆನ್ನಿಯ ಗತಿಯೇನು? ಅವಳು ನಿನ್ನಲ್ಲಿ ಪ್ರೀತಿ ಇಟ್ಟಿದ್ದಾಳೆ. ನಿನಗಾಗಿ ಸೇವೆ, ತ್ಯಾಗ ಮಾಡಲು ಸಿದ್ಧವಾಗಿದ್ದಾಳೆ. ಆದ್ದರಿಂದ ನೀನು ಅವಳನ್ನು ಬಿಡಬಾರದು. ನೀವಿಬ್ಬರೂ ಒಂದಾಗಿ ರಾಮನ ಸೇವೆ ಮಾಡಬೇಕೆಂಬುದು ಅವನ ಇಚ್ಛೆ. ಅದಕ್ಕೆ ನೀನು ಸಾಧು ಆಗಬೇಕಾಗಿಲ್ಲ. ನಿನ್ನ ಪೂರ್ವಿಕರು, ರಾಮಭಕ್ತರೂ ಆದ ಶಬರಿ, ಗುಹ, ಜಟಾಯು, ಸಂಪಾತಿ ಇವರುಗಳು ಮಾಡದೇ ಬಿಟ್ಟಿರುವ ಕೆಲಸವನ್ನು ನೀನು ಪೂರ್ತಿ ಮಾಡು. ಇದೇ ರಾಮನ ಇಚ್ಛೆ" ಎಂದು ಹೇಳಿದರು. ಅದಕ್ಕೆ ಮುನಿಯನು "ಸ್ವಾಮಿ ಆ ಮಹಾತ್ಮರು ಎಲ್ಲಿ? ನನ್ನಂತಹ ಪಾಮರ ಎಲ್ಲಿ? ಅವರು ಪೂರ್ಣ ಮಾಡದೆ ಇದ್ದ ಕೆಲಸ ಯಾವುದು? ಅದನ್ನು ನಾನು ಹೇಗೆ ಪೂರ್ತಿ ಮಾಡಬಲ್ಲೆ?" ಎಂದು ಕೇಳಿದನು.

ಅದಕ್ಕೆ ಋಷಿಯು "ರಾಮಭಕ್ತರಾದ ಶಬರಿ, ಗುಹ, ಜಟಾಯು ಇವರುಗಳು ತಾವು ರಾಮನ ಸೇವೆ ಮಾಡಿ ಮುಕ್ತಿ ಪಡೆದು ಉದ್ಧಾರವಾದರು. ತಮ್ಮ ಕುಲದವರ, ಪಂಗಡದವರ, ಜಾತಿಯವರ ಉದ್ಧಾರ ಮಾಡಲಿಲ್ಲ. ಈ ಅಪೂರ್ಣವಾದ ಕೆಲಸವನ್ನು ನೀನು ಪೂರ್ತಿ ಮಾಡು" ಎಂದು ಉಪದೇಶಿಸಿದರು. ರಾಮನ ಭಜನೆ, ಜಪ, ತಪ, ಧ್ಯಾನ ಇವುಗಳಿಗಿಂತ ಈ ಕೆಲಸವು ಹೆಚ್ಚಿನದು. ಇದೇ ಧರ್ಮ. ಈ ಲೋಕಧರ್ಮವನ್ನು ನೀನು ನಿಭಾಯಿಸಿ ಪೂರೈಸು. ಇದಕ್ಕೆ

ಚೆನ್ನಿಯ ಸಹಕಾರವನ್ನು ಪೂರ್ಣವಾಗಿ ಪಡೆ. ಅವಳು ನಿನ್ನ ಈ ಕಾರ್ಯಕ್ಕೆ ಸಹ ಯೋಗಿನಿಯಾಗಿ, ಸಹಭಾಗಿನಿಯಾಗಿ ನಿನ್ನ ಜೊತೆಗೆ ಇರಲಿ. ಸೀತೆ ರಾಮನ ನೆರಳಾಗಿದ್ದಂತೆ ಅವಳು ನಿನ್ನನ್ನು ಅನುಸರಿಸಲಿ. ಇದು ನಿಮ್ಮ ಬಾಳಿನ ಆದರ್ಶವಾಗಿರಲಿ" ಎಂದು ಆಶೀರ್ವದಿಸಿದರು.

ಆದಿವಾಸಿಗಳಾದ ಭಿಲ್ಲರು, ಬೇಡರು ಪ್ರಾಣಿಗಳಂತೆ ಅನೇಕ ಕಡೆಗಳಲ್ಲಿ ಜೀವಿಸುತ್ತಿದ್ದರು. ಅವರ ಜೀವನವು ಅಜ್ಞಾನ, ಮೂಢನಂಬಿಕೆ ಎಂಬ ಕತ್ತಲೆಯಿಂದ ತುಂಬಿತ್ತು. ಆ ಕತ್ತಲೆಯನ್ನು ಕಳೆದು ಅವರ ಜೀವನದಲ್ಲಿ ಬೆಳಕು ಮೂಡಿಸಬೇಕಾಗಿತ್ತು. ಅವರ ಜೀವನವು ಕಷ್ಟದಿಂದ ಕೂಡಿತ್ತು. ನಿರಾಶೆಯ ಜೀವನದಲ್ಲಿ, ಆಸೆ, ಆಶ್ರಯ, ಆಧಾರ ಕಾಣಬೇಕಿತ್ತು. ಜೀವನದಲ್ಲಿ ಮಹತ್ತರ ಬದಲಾವಣೆ ಹೊಂದಬೇಕಿತ್ತು. ಅವರ ಜೀವನವು ವಿಷಮಯವಾಗಿತ್ತು. ಅದಕ್ಕೀಗ ಅಮೃತಧಾರೆ ಸುರಿಯಬೇಕಾಗಿದೆ. ಕಾಲ ಈಗ ಬದಲಾಗಿದೆ. ಈ ವಿಚಾರ ಅವರಿಗೆ ತಿಳಿಸಿ ಮಾರ್ಗ ತೋರಬೇಕು.

ಈ ಎಲ್ಲ ಮಹತ್ತರ ಕಾರ್ಯ ರಾಮಸೇವೆ. ಇದರ ಭಾರ ಹೊಣೆ ಈಗ ಮುನಿಯ ಮತ್ತು ಚೆನ್ನಿಯ ಮೇಲಿದೆ. ಅವರು ಗುರುಗಳಿಂದ ಉಪದೇಶ ಪಡೆದರು. ತಮ್ಮ ಜೀವನದ ಗುರಿಯನ್ನು ಅರಿತರು. ಅದರಂತೆ ಮುನಿಯ ಮತ್ತು ಚೆನ್ನಿ ತಮ್ಮ ಊರಿಗೆ ಹಿಂದಿರುಗಿದರು. ಸರಳವಾಗಿ ಲಗ್ನವಾದರು. ಮುನಿಯ ತನ್ನ ಜಾತಿಯ ಬಾಂಧವರಿಗೆ ಎಲ್ಲ ಹೊಸ ವಿಚಾರಗಳನ್ನು ದಿನನಿತ್ಯ ತಿಳಿಸುತ್ತಿದ್ದ. ದೇಶದ ಬಗ್ಗೆ ಸಮಾಜದ ಬಗ್ಗೆ ಅದರಲ್ಲಿ ತಮ್ಮ ಪಂಗಡದವರ ಸ್ಥಾನದ ಬಗ್ಗೆ ತಿಳಿಸಿದ. ದೇಶವು ಅವರಿಗೆ ನೀಡುತ್ತಿರುವ ಸೌಕರ್ಯ ಪಡೆಯುವಂತೆ ತಿಳಿಸಿದ. ಚೆನ್ನಿಯೂ ಸಹ ಅಲ್ಲಿಯ ಮಹಿಳೆಯರಿಗೆ ತಿಳಿಸಿದಳು. ಅವರಲ್ಲಿ

ಅರಿವು ಮೂಡಿಸಿದಳು. ಅವರಿಬ್ಬರೂ ತಮ್ಮ ಮಾನವೀಯ ಕಾರ್ಯಗಳಿಂದ ತಮ್ಮ ಜೀವನವನ್ನು ಸಾರ್ಥಕಗೊಳಿಸಿದರು. ತಮ್ಮ ಜನಗಳ ಜೀವನಕ್ಕೆ ದಾರಿ ದೀಪವಾದರು.

* * *



# ೩. ಪರಿತಾಪ

ಲಿಂಗದ ಹಳ್ಳಿಯ ಗೌಡ ನಂಜೇಗೌಡ. ಹಣವಂತ, ಊರಿಗೆ ಮುಖ್ಯಸ್ಥ. ಊರಿನವರೆಲ್ಲ ಅವನನ್ನು ಭಯ, ಭಕ್ತಿ, ಗೌರವದಿಂದ ಕಾಣುತ್ತಿದ್ದರು. ಇವನ



**ಮಗಳ ಮದುವೆಗೆ ಬರಬೇಕೆಂದು ಮಾದ ಗೌಡರನ್ನು ಕೇಳಿಕೊಂಡ**

ಬಳಿ ಜಮೀನು, ಗದ್ದೆ, ಟ್ರಾಕ್ಟರ್, ಎತ್ತುಗಳು ಎಲ್ಲವೂ ಇದ್ದವು. ಹಳ್ಳಿಯ ಜನರು ಬರುವಾಗ ಹೋಗುವಾಗ ಅವನಿಗೆ ನಮಸ್ಕಾರ ಮಾಡುತ್ತಿದ್ದರು. ಗೌಡನು

ತನ್ನದೇ ಆದ ಗತ್ತಿನಿಂದ ಉತ್ತರ ಕೊಡುತ್ತಿದ್ದನು. ಅವರ ಕಷ್ಟಸುಖಗಳನ್ನು ವಿಚಾರಿಸುತ್ತಿದ್ದನು.

ನಂಜೇಗೌಡನ ಹೆಂಡತಿ ಗಿರಿಜವ್ವ. ತನ್ನ ಕುಟುಂಬದ ಬಗ್ಗೆ ಶ್ರೀಮಂತಿಕೆಯ ಬಗ್ಗೆ ಹೆಮ್ಮೆ ಇತ್ತು. ತಮ್ಮ ಜಾತಿಯ ಬಗ್ಗೆ ಹೆಚ್ಚು ಶ್ರದ್ಧೆ. ಅವರಿಗೆ ಇಬ್ಬರು ಮಕ್ಕಳು. ಸತೀಶ, ರಘು. ಸುಖಸಂಸಾರ ನೆಮ್ಮದಿಯ ಜೀವನ ನಡೆಸುತ್ತಿದ್ದರು.

ಒಂದು ದಿನ ಮಾದ ಎಂಬ ರೈತ ನಂಜೇಗೌಡರ ಮನೆಗೆ ಬಂದ. ಗೌಡರಿಗೆ ನಮಸ್ಕರಿಸಿ ಅವರ ಕಾಲ ಬಳಿ ಕುಳಿತ. "ಅಯ್ಯ, ನನ್ನ ಮಗಳ ಮದುವೆ ನಾಳೆ ಇದೆ. ನೀವು ನಮಗೆ ತಂದೆಯಂತೆ. ನಿಮ್ಮ ಮನೆಯವರೊಂದಿಗೆ ನನ್ನ ಮಗಳ ಮದುವೆಗೆ ಬರಬೇಕು. ನಮ್ಮನ್ನು ಹರಸಿ ಕಾಪಾಡಿ" ಎಂದು ಕೇಳಿಕೊಂಡ. ಗೌಡತಿಗೂ ಮಕ್ಕಳಿಗೂ ಖಂಡಿತಾ ಬರಬೇಕೆಂದು ಪ್ರಾರ್ಥಿಸಿ ಹೊರಟುಹೋದ.

ಅನಂತರ ಗೌಡತಿ ಗಿರಿಜವ್ವನು "ಮಾದ, ಹರಿಜನರ ಗುಂಪಿಗೆ ಸೇರಿದವನು. ಅವನ ಮನೆಯ ಮದುವೆಗೆ ನಾವು ಹೋಗುವುದು ಬೇಡ" ಎಂದು ಹೇಳಿದಳು. ಗೌಡನೂ ಆಕೆಯ ಮಾತಿಗೆ ಒಪ್ಪಿದನು. ಆದರೆ ಅವರ ಮಗ ಸತೀಶ ಈ ಮಾತನ್ನು ಒಪ್ಪಲಿಲ್ಲ. "ಏಕೆ ಹೋಗಬಾರದು? ಅದರಲ್ಲಿ ಏನು ತಪ್ಪಿದೆ?" ಎಂದು ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸಿದನು. ಆಗ ತಾಯಿಯು ಮಗನ ಆಸೆಗೆ ಅಡ್ಡಿ ಮಾಡಲು ಮನಸ್ಸಿಲ್ಲದೆ ಒಪ್ಪಿಕೊಂಡಳು. ಆದರೆ ಅದಕ್ಕೆ ಒಂದು ಷರತ್ತು ಹಾಕಿದಳು. "ನೀನು ಬೇಕಾದರೆ ಮದುವೆಗೆ ಹೋಗು. ಆದರೆ ಅಲ್ಲಿ ಅವನ ಮನೆಯಲ್ಲಿ ಮದುವೆಯ ಊಟವನ್ನು ಮಾಡಬಾರದು. ಹಾಗಿದ್ದರೆ

ಹೋಗು" ಎಂದು ಹೇಳಿದನು. ಮತ್ತೆ ಸತೀಶನು "ಏಕೆ ಊಟ ಮಾಡಬಾರದು. ಅದರಲ್ಲಿ ಏನು ತಪ್ಪಿದೆ? ಎಲ್ಲರೂ ಮಾಡುವ ಊಟದ ಧಾನ್ಯ ಒಂದೇ ಆಗಿರುವುದಿಲ್ಲವೆ?" ಎಂದು ಅನೇಕ ಪ್ರಶ್ನೆಗಳನ್ನು ಕೇಳಿದನು. ತಾಯಿಯು ಎಷ್ಟು ಸಮಾಧಾನ ಮಾಡಿದರೂ ಅವನು ಒಪ್ಪಲಿಲ್ಲ. ಹೇಗಾದರಾಗಲಿ, ನಾನು ಮಾದನ ಮಗಳ ಮದುವೆಗೆ ಹೋಗಿಯೇ ತೀರುತ್ತೇನೆ ಎಂದು ನಿರ್ಧಾರ ಮಾಡಿದ.

ಸತೀಶ ಮಾರನೆಯ ದಿನ ಮದುವೆಗೆ ಹೋದ. ಮದುವೆಯ ಮನೆಯಲ್ಲಿ ಅವನನ್ನು, ಅವನ ಗೆಳೆಯರನ್ನು ಕಂಡು ಮಾದನ ಸಂತೋಷಕ್ಕೆ ಪಾರವೇ ಇಲ್ಲ. "ಬನ್ನಿ ಬುದ್ಧಿ. ನಿಮ್ಮ ಆಗಮನದಿಂದ ಧನ್ಯನಾದೆ" ಎಂದು ಕೈಜೋಡಿಸಿ ಕರೆದ. ಮದುವೆಯ ಮನೆಯಲ್ಲಿ ಗೆಳೆಯರೆಲ್ಲ ಊಟ ಮಾಡಿದರು. ಸತೀಶನಿಗೂ ಬಲವಂತ ಮಾಡಿದರು. ಮಾದನೂ ಕೈಜೋಡಿಸಿ ಕೇಳಿಕೊಂಡ. ಎಲ್ಲರ ಒತ್ತಾಯಕ್ಕೆ ಕಟ್ಟುಬಿದ್ದು ಸತೀಶ ಊಟ ಮಾಡಲೇಬೇಕಾಯಿತು. ಹಳ್ಳಿಯ ಜನರು ಇದನ್ನು ನೋಡಿ ಬೆರಗಾದರು. ಗೌಡರ ಮಗ ಹರಿಜನರ ಮನೆಯಲ್ಲಿ ಊಟ ಮಾಡುವ ವಿಚಾರ ಅವರಿಗೆ ಆಶ್ಚರ್ಯವನ್ನು ಉಂಟುಮಾಡಿತು. ಈ ವಿಚಾರವನ್ನು ಹಳ್ಳಿಯ ಕೆಲವು ಮಂದಿ ಸಹಿಸಲಿಲ್ಲ. ಅವರು ಇದನ್ನು ಗೌಡನ ಬಳಿಯಲ್ಲಿ ಚಾಡಿ ಹೇಳಿದರು.

ಗೌಡ ವಿಚಾರ ತಿಳಿದು ಅತಿಯಾಗಿ ಕೋಪಗೊಂಡ. ತನ್ನ ಮಗನನ್ನು ಕರೆಯಿಸಿ ಈ ವಿಚಾರದ ಬಗ್ಗೆ ಕೇಳಿದ. ಸತೀಶ ಈ ವಿಚಾರ ನಿಜವೆಂದು ಒಪ್ಪಿಕೊಂಡ. ನಂಜೇಗೌಡನಿಗೆ ಕೋಪ ಉಕ್ಕಿ ಬಂತು. ಮಗನಿಗೆ ಚೆನ್ನಾಗಿ ಬೈದು ಹೊಡೆದು ಮತ್ತೆಂದೂ ಈ ರೀತಿ ಕೆಲಸ ಮಾಡಬೇಡ ಎಂದು ಬುದ್ಧಿ ಹೇಳಿದನು.

ಈ ಘಟನೆಯ ನಂತರ ಕೆಲವಾರು ದಿನಗಳು ಕಳೆದವು. ಒಂದು ದಿನ ಸತೀಶ ತನ್ನ ಗೆಳೆಯರೊಡನೆ ಆಟವಾಡುತ್ತಿದ್ದಾಗ ನಂಜೇಗೌಡನು ನೋಡಿದನು. ಅವರೊಡನೆ ಮಾದನ ಮಗ ಕೆಂಪಣ್ಣನೂ ಇದ್ದನು. ಇದನ್ನು ಕಂಡು ಗೌಡನು ಕೋಪಗೊಂಡನು. ಮಿತಿಮೀರಿದ ಕೋಪದಿಂದ ಅವನು ಕೆಂಪಣ್ಣನಿಗೆ ಬಾರಿಸಿದನು. ಸತೀಶನನ್ನು ಕುರಿತು "ಇವನೊಡನೆ ಆಡಬೇಡ, ಗೆಳೆತನ ಬೇಡ ಎಂದು ನಾನು ನಿನಗೆ ಆ ದಿನವೇ ಹೇಳಲಿಲ್ಲವೆ? ಪುನಃ ಏಕೆ ಇವನ ಜೊತೆ ಸೇರಿದೆ" ಎಂದು ಅವನಿಗೂ ಎರಡು ಏಟು ಕೊಟ್ಟ. ಮಾದನ ಮಗ ಕೆಂಪಣ್ಣನನ್ನು ಕುರಿತು "ಲೇ ಕೆಂಪ, ನಿನಗೆ ಮಾಡಲು ಬೇರೆ ಕೆಲಸವಿಲ್ಲವೆ? ನನ್ನ ಮಗನಿಗೆ ನೀನು ಸರಿ ಸಾಟಿಯೆ? ಇನ್ನೆಂದಾದರೂ ನಾನು ನಿನ್ನನ್ನು ನನ್ನ ಮಗನೊಂದಿಗೆ ಕಂಡರೆ ಕೊಂದುಬಿಟ್ಟೇನು?" ಎಂದು ಅಬ್ಬರಿಸಿದ. ಸತೀಶ ಹೆದರುತ್ತಲೇ "ಅಪ್ಪ, ಕೆಂಪ ನನ್ನ ಜೊತೆ ಏಕೆ ಆಡಬಾರದು? ನಾನು ಏಕೆ ಅವನ ಸಹವಾಸ ಮಾಡಬಾರದು" ಎಂದು ಕೇಳಿದ. ಅದಕ್ಕೆ ಗೌಡನು "ಅವನು ಚಮ್ಮಾರ, ಚಪ್ಪಲಿ ಹೊಲಿಯುವವನು. ಅವನು ಜಾತಿಯಲ್ಲಿ ಕೆಲಸದಲ್ಲಿ ನಮಗಿಂತ ಕೀಳು. ನಮಗೆ ಅವರಿಗೆ ಸಾಟಿಯೇ?" ಎಂದು ಹೇಳಿದ. ಅಲ್ಲಿಂದ ಎಲ್ಲರೂ ತಮ್ಮ ತಮ್ಮ ದಾರಿ ಹಿಡಿದರು.

ಮಾರನೆಯ ದಿನ ಗೌಡರು ಮಾದನಿಗೆ ಹೇಳಿ ಕಳುಹಿಸಿದರು. ಮಾದನು ಹೆದರುತ್ತಲೇ ಧಣಿಯ ಬಳಿಗೆ ಬಂದು ನಮಸ್ಕರಿಸಿದ. ಗೌಡರು "ಏನಯ್ಯ ಮಾದ? ನೀನು ನನ್ನನ್ನು ಏನೆಂದು ತಿಳಿದಿದ್ದೀಯ? ಹಿರಿಯರು, ಕುಲಸ್ಥರು ಎಂಬ ಭಯವೇ ಇಲ್ಲವೇ? ನಿನಗೆ ಅಹಂಕಾರ ಹೆಚ್ಚಾಗಿದೆ" ಎಂದು ಗದರಿಸಿದ. ಈ ಮಾತನ್ನು ಕೇಳಿ ಮಾದನಿಗೆ ಏನು ಉತ್ತರ ಕೊಡಬೇಕು ಎಂದು ತಿಳಿಯಲಿಲ್ಲ. ಅವನು ಹೆದರುತ್ತ ನಡುಗುತ್ತಾ "ಸ್ವಾಮಿ, ನನ್ನಿಂದ ಯಾವ ಅಪರಾಧವಾಗಿದೆ.

ದಯವಿಟ್ಟು ಕ್ಷಮಿಸಿ ಕಾಪಾಡಿ" ಎಂದು ಕಾಲಿಗೆ ಬಿದ್ದನು. ಆಗ ಗೌಡನು "ನನ್ನ ಮಗನಿಗೆ ನಿನ್ನ ಮನೆಯಲ್ಲಿ ಊಟ ಏಕೆ ಮಾಡುವಂತೆ ಹೇಳಿದೆ. ನಿನಗೆ ಅಷ್ಟು ಕೊಬ್ಬೆ? ಅಲ್ಲದೆ ನಿನ್ನ ಮಗ ಕೆಂಪ ನನ್ನ ಮಗನ ಜೊತೆ ಮಾತನಾಡುತ್ತಾನೆ, ಆಡುತ್ತಾನೆ. ಅವನಿಗೆ ಅಷ್ಟು ಧೈರ್ಯ? ಇದೆಲ್ಲ ನಡೆಯುವುದಿಲ್ಲ. ಎಚ್ಚರಿಕೆ. ಈ ವಿಚಾರ ನಿನ್ನ ಮಗನಿಗೆ ಹೇಳು. ಮತ್ತೆಂದಾದರೂ ನಾನು ಪುನಃ ನನ್ನ ಮಗನ ಜೊತೆಯಲ್ಲಿ ಅವನನ್ನು ಕಂಡರೆ ನೀವು ಈ ಊರಲ್ಲೇ ಇರುವಂತಿಲ್ಲ ಎಚ್ಚರಿಕೆ" ಎಂದು ಹೆದರಿಸಿ ಬೈದು ಕಳುಹಿಸಿದ.

ಕೆಲವು ತಿಂಗಳುಗಳು ಕಳೆದವು. ಒಂದು ಬಾರಿ ಗೌಡರ ಮಗ ಸತೀಶ ತನ್ನ ಗೆಳೆಯರೊಂದಿಗೆ ನದಿಯಲ್ಲಿ ಸ್ನಾನ ಮಾಡಲು ಹೋದ. ಅವನ ಜೊತೆಯಲ್ಲಿ ಅವನ ತಮ್ಮ ರಘುವೂ ಸಹ ಹೋಗಿದ್ದನು. ಅವನು ಸಣ್ಣವನು. ಈಜಲು ಬರುತ್ತಿರಲಿಲ್ಲ. ಅದೇ ಸಮಯಕ್ಕೆ ಸರಿಯಾಗಿ ಕೆಂಪನು ತನ್ನ ತಂದೆಯೊಡನೆ ಹೊಲದ ಕಡೆ ಹೊರಟಿದ್ದ. ದಾರಿಯಲ್ಲಿ ಗೆಳೆಯರನ್ನು ಕಂಡು ಆನಂದವಾಯಿತು. ಅವರೊಡನೆ ತಾನೂ ಅಲ್ಲಿ ಸೇರಿದ. ನದಿಯಲ್ಲಿ ಸ್ನಾನ ಮಾಡುತ್ತ ಇರುವಾಗ ಇದ್ದಕ್ಕಿದ್ದಂತೆ ಕಾಲು ಜಾರಿ ಗೌಡರ ಚಿಕ್ಕ ಮಗ ರಘು ನದಿಯಲ್ಲಿ ಕುಸಿದು ಬಿದ್ದ. ನದಿಯಲ್ಲಿ ಸ್ನಾನ ಮಾಡುತ್ತಿದ್ದ ಎಲ್ಲರೂ ಜೋರಾಗಿ ಕೂಗತೊಡಗಿದರು. ಗಾಬರಿಯಿಂದ ಕಿರುಚುತ್ತ ಸತೀಶ ರಘುವನ್ನು ಪಾರು ಮಾಡಲು ಪ್ರಯತ್ನಿಸಿದ. ಆದರೆ ನದಿಯ ನೀರಿನ ರಭಸ ಹೆಚ್ಚಾಗಿದ್ದರಿಂದ ಅವನಿಗೆ ಸಾಧ್ಯವಾಗಲಿಲ್ಲ. ಅವನು ಅಸಹಾಯಕನಾಗಿ ಜೋರಾಗಿ "ಸಹಾಯ ಮಾಡಿ" ಎಂದು ಕೂಗಿ ಅಳತೊಡಗಿದ. ಮಾದನ ಹೊಲ ಸ್ವಲ್ಪ ಹತ್ತಿರದಲ್ಲೇ ಇತ್ತು. ಅವನಿಗೆ ಈ ಮಕ್ಕಳ ಕೂಗಾಟ, ಚೀರಾಟ ಕೇಳಿಸಿತು. ಗಾಬರಿಯಿಂದ ಓಡಿಬಂದಾಗ ರಘು ನೀರಿನಲ್ಲಿ ಮುಳುಗುತ್ತಿದ್ದ. ಮೇಲೇಳಲು ಪ್ರಯತ್ನಿಸುತ್ತಿದ್ದ. ಉಳಿದ ಮಕ್ಕಳು



**ಮುಳುಗುತ್ತಿದ್ದ ರಘುವನ್ನು ಮಾದ ರಕ್ಷಿಸಿದ**

ಏನು ಮಾಡಲು ತೋರದೆ ಗಾಬರಿಯಿಂದ ಅಳುತ್ತಿದ್ದರು. ಇದನ್ನು ಕಂಡು ಮಾದನು ಹಿಂದೆ ಮುಂದೆ ಯೋಚಿಸದೆ ನದಿಗೆ ಧುಮುಕಿದ. ಈಜಿ ರಘುವನ್ನು ದಡಕ್ಕೆ ತಂದು ಹಾಕಿದ. ರಘು ಗಾಬರಿಯಿಂದ ಮೂರ್ಛೆ ಹೋಗಿದ್ದ. ತುಂಬಾ ಗಾಯಗಳಾಗಿ ರಕ್ತ ಸುರಿಯುತ್ತಿತ್ತು. ದಡದಲ್ಲಿ ಅವನನ್ನು ಮಲಗಿಸಿ ಅವನ

ಹೊಟ್ಟೆಯಿಂದ ನೀರು ಹೊರಕ್ಕೆ ತೆಗೆದಿದ್ದ. ಗಾಯಗಳಿಗೆ ಅಲ್ಲಿಯೇ ಇದ್ದ ಕೆಲವು ಸೊಪ್ಪಿನಿಂದ ಔಷಧಿ ಮಾಡಿ ಹಾಕಿದ್ದ. ಈಗ ರಘು ಅಪಾಯದಿಂದ ಪಾರಾಗಿದ್ದ.

ಊರಿನ ಹುಡುಗರು ಈಗ ನೆಮ್ಮದಿಯಿಂದ ಊರಿನ ಒಳಗೆ ಓಡಿದರು. ಗೌಡರ ಮನೆಯ ಬಳಿ ಓಡಿ ಬಂದು "ಗೌಡರೆ ನಿಮ್ಮ ಮಗ ರಘು ನದಿಯಲ್ಲಿ ಮುಳುಗಿದ. ಮಾದ ಅವನನ್ನು ಉಳಿಸಿದ" ಎಂದು ಹೇಳಿದರು. ಈ ವಿಚಾರ ಕೇಳಿ ಗೌಡ ಮತ್ತು ಗೌಡತಿಗೆ ಗಾಬರಿಯಾಯಿತು. ಅವರು ನಡುಗುತ್ತಾ ನದಿಯ ಬಳಿಗೆ ಓಡಿದರು. ನದಿಯ ದಡದಲ್ಲಿ ತಮ್ಮ ಮಗ ರಘುವನ್ನು ಕಂಡು ಅವರಿಗೆ ನೆಮ್ಮದಿಯಾಯಿತು. ಅದರ ಜೊತೆಗೆ ಮಾದನಿಂದ ತಮ್ಮ ಮಗ ಬದುಕಿದ. ಅವನಿಗೆ ಈ ದಿನ ಜೀವದಾನ ಮಾಡಿದವನು ಮಾದ ಎಂಬ ವಿಚಾರ ತಿಳಿದು ಅವರಿಗೆ ನಾಚಿಕೆಯಾಯಿತು. ತಾವು ಯಾವಾಗಲೂ ಅವನನ್ನು ಅವನ ಜಾತಿ, ಕಸುಬನ್ನು, ಅವನ ಮಗನನ್ನು ಕೀಳಾಗಿ ಕಾಣುತ್ತಿದ್ದ ವಿಚಾರ ನೆನಪಿಗೆ ಬಂತು. ಅವರಿಗೆ ತಮ್ಮ ಬಗ್ಗೆ ಬಹಳ ಹೀನಾಯ ಎನಿಸಿತು.

"ಮಾದನನ್ನು ತಾವು ಎಂದೂ ಮನುಷ್ಯನಂತೆ ಕಾಣಲಿಲ್ಲ. ಹೀನಾಯವಾಗಿ ಕಂಡೆವು. ಆದರೆ ಆ ಕೀಳು ಮನುಷ್ಯನೇ ಈ ದಿನ ನನಗೆ ಮಗನ ಪ್ರಾಣವನ್ನು ನೀಡಿದ" ಎಂದು ಯೋಚಿಸಿ ಅವರಿಗೆ ಪರಿತಾಪ ಉಂಟಾಯಿತು.

ಗೌಡ ಮತ್ತು ಗೌಡತಿ ಗಿರಿಜವ್ವ ಇಬ್ಬರಿಗೂ ತಮ್ಮ ತಪ್ಪಿನ ಅರಿವಾಯಿತು. ಅವರಿಬ್ಬರೂ ತಮ್ಮ ಮಗನನ್ನು ತಬ್ಬಿಕೊಂಡರು. ನಂತರ ಕಣ್ಣೀರಿಡುತ್ತಾ ಮಾದನ ಕೈಹಿಡಿದುಕೊಂಡು "ಮಾದ, ನೀನು ನಮ್ಮನ್ನು ಕ್ಷಮಿಸು.

ನಾವು ನಿನ್ನನ್ನು ಬಹಳ ಕೀಳಾಗಿ ಕಂಡೆವು. ಆದರೆ ಈ ದಿನ ನಿನ್ನಿಂದ ನಮ್ಮ ಮನೆಯ ಬೆಳಕು ಆರದೆ ಉಳಿಯಿತು. ನಿನ್ನೀ ಋಣವು ನಾವು ಹೇಗೆ ತೀರಿಸಬಲ್ಲೆವು?" ಎಂದು ಬೇಡಿಕೊಂಡರು. ಅವರ ಮನಸ್ಸು ಪಶ್ಚಾತ್ತಾಪದಿಂದ ಬೆಂದುಹೋಗಿತ್ತು.

ತಂದೆ ತಾಯಿಯ ಮನಸ್ಸು ಬದಲಾದುದನ್ನು ಕಂಡು ಸತೀಶನಿಗೆ ತುಂಬಾ ಸಂತೋಷವಾಯಿತು. ಅವನು ತನ್ನ ತಂದೆಯನ್ನು ಕುರಿತು "ಅಪ್ಪ ನಿಜವಾಗಿ ಇಂದು ಮಾದನಿಂದ ನಮ್ಮ ರಘು ಬದುಕಿದ. ನಾವು ಅವನ ಉಪಕಾರಕ್ಕೆ ಪ್ರತಿಯಾಗಿ ಏನಾದರೂ ಮಾಡಬೇಕು. ಅದಕ್ಕಾಗಿ ನಾವು ಅವನ ಮಗ ಕೆಂಪನನ್ನು ಶಾಲೆಗೆ ಸೇರಿಸೋಣ. ಅವನು ಸಹ ಎಲ್ಲರಂತೆ ವಿದ್ಯೆ ಕಲಿತು ಸ್ವತಂತ್ರನಾಗಿ ದುಡಿಯಲಿ. ಆಳಂತೆ ಹೊಲದಲ್ಲಿ ಅವನು ದುಡಿಯುವುದು ಬೇಡ. ಅಪ್ಪ ದಯವಿಟ್ಟು ನೀವು ಇದಕ್ಕೆ ಒಪ್ಪಿ" ಎಂದು ಕೇಳಿಕೊಂಡ. ನಂಜೇಗೌಡ ಸಂತೋಷದಿಂದ ಇದಕ್ಕೆ ಒಪ್ಪಿದ. ಹಳ್ಳಿಯ ಜನರಿಗೆಲ್ಲಾ ಇದರಿಂದ ಸಂತೋಷವಾಯಿತು. ಮಾದ ಮತ್ತು ಕೆಂಪನ ಮುಖದಲ್ಲಿ ಧನ್ಯತೆ ತುಂಬಿತು.

***

ಕನ್ನಡ ವಿಶ್ವವಿದ್ಯಾ ... ಟ್ಟದವರೆಗೆ ಉತ್ತಮ
ಹಾಗೂ ಉಪಯ ... ಪಠ್ಯಪುಸ್ತಕ ರಚನಾ
ವಿಭಾಗ'ವನ್ನು ... ಪಠ್ಯಪುಸ್ತಕ ರಚನೆ
ಮಾಡಬೇಕೆಂದು ... . ನವಸಾಕ್ಷರರಿಗಾಗಿ
ಪುಸ್ತಕ ಬರೆಸುವ ... ಕ್ಕೆ ವಹಿಸಿಕೊಟ್ಟರು.
ವಿಶ್ವವಿದ್ಯಾಲಯ ... ಖ್ಯಾತ ಲೇಖಕರನ್ನು,
ಭಾಷಾತಜ್ಞರನ್ನು, ... ರೆಲ್ಲರ ಅಭಿಪ್ರಾಯ,
ಸಲಹೆ, ಸಹಕಾರ ... ಮುದ್ರಣ ವಿನ್ಯಾಸ,
ಚಿತ್ರಗಳ ಮಹತ್ವ ... ನೇಕ ಸಲ ಚರ್ಚಿಸಿ
ಯೋಜನೆಯನ್ನು ...

ನವಸಾಕ್ಷರರಿಗಾಗಿ ... ೇ ಪ್ರಕಟವಾಗಿರುವ
ಪುಸ್ತಕಗಳನ್ನೆಲ್ಲ ... ಭಾಷಾತಜ್ಞರಿಂದ
ಪರಿಶೀಲಿಸಲಾಯಿ ... ಸಿಕೊಂಡು ಅವರಿಗೆ
ಕಮ್ಮಟಗಳನ್ನು ... ಂತ ಆಯ್ದ ಜಿಲ್ಲೆ,
ತಾಲೂಕುಗಳಿಗೆ ... ರುವವರಿಂದ ಅದರ
ಗುಣದೋಷಗಳ ... ವಿಶ್ವವಿದ್ಯಾಲಯದ
ಗಣಕಯಂತ್ರದಲ್ಲಿ ವಿಶ್ಲೇಷಿಸಲಾಯಿತು; ಮತ್ತೆ ಮತ್ತೆ ಕ್ಷೇತ್ರಗಳಿಗೆ ಹೋಗಿ, ಕ್ಷೇತ್ರ ಸಹಾಯಕರು ನೀಡಿದ್ದ ಮಾಹಿತಿಗಳನ್ನೆಲ್ಲ ಮರು ಪರಿಶೀಲನೆ ಮಾಡಿ, ನಂತರ ನವಸಾಕ್ಷರರ ಅಪೇಕ್ಷೆಗೆ ಅನುಗುಣವಾಗಿ ವಿಷಯದ ಆದ್ಯತೆಗಳನ್ನು ನಿರ್ಧರಿಸಿಕೊಂಡು ಪುಸ್ತಕ ರಚನೆಗೆ ತೊಡಗಲಾಯಿತು; ಪ್ರಖ್ಯಾತ ಲೇಖಕರು ನಮ್ಮ ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಜೊತೆ ಚರ್ಚಿಸಿ ತಮ್ಮ ಹಸ್ತಪ್ರತಿಗಳಿಗೆ ಅಂತಿಮ ರೂಪ ಕೊಟ್ಟರು. ಕಲಾವಿದರು ವಿಷಯಗಳಿಗೊಪ್ಪುವ ಚಿತ್ರಗಳನ್ನು ಬರೆದುಕೊಟ್ಟರು. ಹೀಗೆ ಸಿದ್ಧಗೊಂಡ ಹಸ್ತಪ್ರತಿಗಳನ್ನು ನವಸಾಕ್ಷರರ ಬಳಿ ಕೊಂಡೊಯ್ದು ಅವರ ಮುಂದೆ ಪಠಿಸಿ ನಂತರ ಅವರ ಅಭಿಪ್ರಾಯ, ಪ್ರತಿಕ್ರಿಯೆಗಳನ್ನು ಅಳವಡಿಸಿ ಹಸ್ತಪ್ರತಿಯನ್ನು ಅಂತಿಮಗೊಳಿಸಲಾಯಿತು.

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು